





(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ರಾತ್ರಿಯಾಣೆ- ಅದು ಆವರಿಸಿದಾಗ-

وَالَّيْلِ اِذَا يَغْشٰى ۙ ١

2. ಹಗಲಿನಾಣೆ- ಅದು ಬೆಳಗಿದಾಗ-

وَالنَّهَارِ اِذَا تَجَلّٰى ۙ ٢

3. ಮತ್ತು ಗಂಡು ಹೆಣ್ಣುಗಳನ್ನು ಸೃಷ್ಟಿಸಿದವನಾಣೆ-

وَمَا خَلَقَ الذَّكَرَ وَالْاُنْثٰٓى ۙ ٣

4. ವಾಸ್ತವದಲ್ಲಿ ನಿಮ್ಮ ಪರಿಶ್ರಮಗಳು ವಿಭಿನ್ನ ತರದ್ದಾಗಿವೆ.[1]

اِنَّ سَعْيَكُمْ لَشَتّٰى ۗ ٤

5. ಆದುದರಿಂದ ಯಾರು (ದೇವಮಾರ್ಗದಲ್ಲಿ) ಸಂಪತ್ತು ಕೊಟ್ಟನೋ (ದೇವಾಜ್ಞೋಲ್ಲಂಘನೆಯಿಂದ) ದೂರವುಳಿದನೋ-

فَاَمَّا مَنْ اَعْطٰى وَاتَّقٰى ۙ ٥

6. ಮತ್ತು ಒಳಿತನ್ನು ಸತ್ಯವೆಂದು ಅಂಗೀಕರಿಸಿದವನಿಗೆ-

وَصَدَّقَ بِالْحُسْنٰى ۙ ٦

7. ಅವನಿಗೆ ನಾವು ಸರಳ ಪಥವನ್ನು ಸುಗಮಗೊಳಿಸುವೆವು.[2]

فَسَنُيَسِّرُهٗ لِلْيُسْرٰى ۗ ٧

8. ಮತ್ತು ಜಿಪುಣತೆ ತೋರಿದನೋ (ತನ್ನ ಪ್ರಭುವಿನ ಬಗ್ಗೆ) ನಿರ್ಲಕ್ಷ್ಯ ತೋರಿದನೋ-

وَاَمَّا مَنْۢ بَخِلَ وَاسْتَغْنٰى ۙ ٨

9. ಮತ್ತು ಒಳಿತನ್ನು ತಿರಸ್ಕರಿಸಿದನೋ-

وَكَذَّبَ بِالْحُسْنٰى ۙ ٩

10. ಅವನಿಗೆ ನಾವು ಕಠಿಣ ದಾರಿಯನ್ನು ಸುಗಮಗೊಳಿಸುವೆವು.[3]

فَسَنُيَسِّرُهٗ لِلْعُسْرٰى ۗ ١٠

---

1. ಅರ್ಥಾತ್- ದಿನ ರಾತ್ರಿಗಳು ಮತ್ತು ಹೆಣ್ಣು ಗಂಡುಗಳು ಯಾವ ರೀತಿ ಭಿನ್ನವಾಗಿವೆಯೋ, ಅದರ ಲಕ್ಷಣ ಮತ್ತು ಪರಿಣಾಮಗಳು ಹೇಗೆ ಪರಸ್ಪರ ತದ್ವಿರುದ್ಧವಾಗಿವೆಯೋ ಹಾಗೆಯೇ ನೀವು ಯಾವ ಮಾರ್ಗ ಮತ್ತು ಉದ್ದೇಶಗಳಿಗಾಗಿ ನಿಮ್ಮ ಪ್ರಯತ್ನಗಳನ್ನು ವ್ಯಯಿಸುತ್ತಿದ್ದೀರೋ ಅವು ತನ್ನ ಸ್ವರೂಪ ಮತ್ತು ಪರಿಣಾಮಗಳ ದೃಷ್ಟಿಯಿಂದ ತದ್ವಿರುದ್ಧವಾಗಿವೆ.
2. ಅರ್ಥಾತ್- ಮಾನವನ ಪ್ರಕೃತಿ ಸಹಜವಾದ ಮಾರ್ಗದಲ್ಲಿ ನಡೆಯುವುದನ್ನು ಅವನ ಪಾಲಿಗೆ ಸುಲಭಗೊಳಿಸುವೆವು.
3. ಅರ್ಥಾತ್- ಪ್ರಕೃತಿಗೆ ವಿರುದ್ಧವಾಗಿ ನಡೆಯುವುದನ್ನು ಅವನ ಪಾಲಿಗೆ ಸುಲಭಗೊಳಿಸುವೆವು.

11. ಅವನು ವಿನಾಶ ಹೊಂದುವಾಗ ಅವನ ಸಂಪತ್ತು ಅವನ ಯಾವ ಪ್ರಯೋಜನಕ್ಕೆ ಬಂದೀತು?

وَمَا يُغْنِىْ عَنْهُ مَالُهٗۤ اِذَا تَرَدّٰى ﴿۱۱﴾

12. ಖಂಡಿತವಾಗಿಯೂ ದಾರಿತೋರಿಸುವ ಹೊಣೆ ನಮ್ಮ ಮೇಲಿದೆ-

اِنَّ عَلَيْنَا لَلْهُدٰى ﴿۱۲﴾

13. ಮತ್ತು ವಾಸ್ತವದಲ್ಲಿ ಪರಲೋಕ ಮತ್ತು ಇಹಲೋಕ ಇವೆರಡಕ್ಕೂ ನಾವೇ ಒಡೆಯರು.

وَاِنَّ لَنَا لَلْاٰخِرَةَ وَالْاُوْلٰى ﴿۱۳﴾

14. ನಾನಂತು ಧಗಧಗಿಸುವ ಅಗ್ನಿಯ ಕುರಿತು ನಿಮಗೆ ಎಚ್ಚರಿಕೆ ಕೊಟ್ಟು ಬಿಟ್ಟಿರುವೆನು.

فَاَنْذَرْتُكُمْ نَارًا تَلَظّٰى ﴿۱۴﴾

15. ಯಾರೂ ಅದರಲ್ಲಿ ಉರಿಯಲಾರರು-

لَا يَصْلٰىهَاۤ اِلَّا الْاَشْقَى ﴿۱۵﴾

16. ಸುಳ್ಳಾಗಿಸಿದ ಹಾಗೂ ವಿಮುಖನಾದ ಹತಭಾಗ್ಯನ ಹೊರತು.

الَّذِىْ كَذَّبَ وَتَوَلّٰى ﴿۱۶﴾

17. ಅತ್ಯಂತ ಧರ್ಮನಿಷ್ಠನು ಅದರಿಂದ ದೂರವಿರಿಸಲ್ಪಡುವನು-

وَسَيُجَنَّبُهَا الْاَتْقَى ﴿۱۷﴾

18. ಪುನೀತನಾಗಲಿಕ್ಕಾಗಿ ತನ್ನ ಸಂಪತ್ತನ್ನು ದಾನ ಮಾಡುವವನು.

الَّذِىْ يُؤْتِىْ مَالَهٗ يَتَزَكّٰى ﴿۱۸﴾

19. ಅವನು ಪ್ರತಿಫಲ ಕೊಡಬೇಕಾದಂತಹ ಯಾರ, ಯಾವ ಉಪಕಾರ ಭಾರವೂ ಅವನ ಮೇಲಿಲ್ಲ-

وَمَا لِاَحَدٍ عِنْدَهٗ مِنْ نِّعْمَةٍ تُجْزٰۤى ﴿۱۹﴾

20. ಅವನಂತು ಕೇವಲ ತನ್ನ ಸರ್ವೋನ್ನತ ಪ್ರಭುವಿನ ಪ್ರಸನ್ನತೆಗಾಗಿ ಈ ಕಾರ್ಯವನ್ನು ಮಾಡುತ್ತಾನೆ.

اِلَّا ابْتِغَآءَ وَجْهِ رَبِّهِ الْاَعْلٰى ﴿۲۰﴾

21. ಮತ್ತು ಅವನು ಖಂಡಿತವಾಗಿಯೂ (ಇವನಿಂದ) ಪ್ರಸನ್ನನಾಗುವನು.

وَلَسَوْفَ يَرْضٰى ﴿۲۱﴾ ع

---